# ಡಾಲ್ಫಿನ್

ರಾಬರ್ಟ ಏ ಮಾರಿಸ್

ಚಿತ್ರ: ಮಾಮೋರು ಫುನಾಇ



# ಡಾಲ್ಫಿನ್

ರಾಬರ್ಟ ಏ ಮಾರಿಸ್

ಚಿತ್ರ: ಮಾಮೋರು ಫುನಾಇ

ಕನ್ನಡಕ್ಕೆ: ಪ್ರಭಾಕರ ನಾನಾವಟಿ



ಮುಂಜಾನೆಯ ಸಮಯ
ದೊಡ್ಡ ಸೂರ್ಯನು ಮುಗಿಲಲ್ಲಿ ಬಂದಿದ್ದಾನೆ
ಸಮುದ್ರವು ಶಾಂತವಿದೆ.

ಟ್ವೀಟ್! ಟ್ವೀಟ್! ! ಟ್ವೀಟ್! ! !
ಈ ಧ್ವನಿ ಡಾಲ್ಫಿನಗಳದ್ದು.
ಅವು ಉತ್ತೇಜಿತವಾಗಿವೆ.
ಅವು ಹೆಣ್ಣು ಡಾಲ್ಫಿನ್ ಸುತ್ತ ಈಸುತ್ತಿವೆ.
ಆ ತಾಯಿ ಮರಿ ಹಾಕುತ್ತಲಿದೆ.





ಮೊದಲು, ಒಂದು ಚಿಕ್ಕ ಬಾಲವು.
ಆ ಮೇಲೆ ಅದರ ಶರೀರವು ಹೊರಬರುತ್ತಲಿದೆ.
ಒಮ್ಮೆಲೆ ಮರಿ ಹೊರಗೆ ಬರುತ್ತದೆ.
ಅದು ಮೂರು ಅಡಿ ಉದ್ದವಾದದ್ದು.
ತಾಯಿ ಡಾಲ್ಫಿನ್ ಎಂಟು ಅಡಿ ಉದ್ದ.

ಮರಿ ಡಾಲ್ಫಿನ್ ಕರುವಿನ ಹಾಗೆ.
ತಾಯಿ ಡಾಲ್ಫಿನ್ ಆಕಳ ಹಾಗೆ.
ಪೂರ್ಣ ಬೆಳೆದ ಗಂಡು ಡಾಲ್ಫಿನ್ ಎತ್ತಿನ ಹಾಗೆ.
ಇದು ಗಂಡು ಮರಿ.





ಡಾಲ್ಫಿನ್ ಸಸ್ತನಿ ಪ್ರಾಣಿಗಳು
ಅವು ಉಸಿರಾಡಿಸುತ್ತವೆ.

ಮರಿ ಡಾಲ್ಫಿನ್ ಬೇಗನೆ ಉಸಿರಾಡಿಸಬೇಕು.
ಇಲ್ಲದಿದ್ದರೆ ಅದು ಮುಳುಗಿ ಸಾಯುವದು.
ತಾಯಿ ಡಾಲ್ಫಿನ್
ಕೂಡಲೇ ಮರಿಯ ಕೆಳಗೆ ಈಸುವದು.
ಮೆಲ್ಲಗೆ ಅದನ್ನು ನೀರಿನ ಮೇಲೆ
ಬರುವ ಹಾಗೆ ನೂಕುವದು.

ಸ್ವಿಶ್! ಸ್ವಿಶ್!
ಮರಿ ಮೊದಲ ಉಸಿರನ್ನು ತೆಗೆದುಕೊಳ್ಳುವದು.
ಅದರ ಮೂಗು ತಲೆಯ ಮೇಲಿದೆ.
ಅದಕ್ಕೆ ಬ್ಲೋಹೋಲ್ ಎಂದು ಹೆಸರು.
ಈಗ ಮರಿ ತನ್ನಷ್ಟಕ್ಕೆ ತಾನೇ ಈಸುತ್ತದೆ.
ಯಾವಾಗ ಬೇಕೋ ಆಗ ಉಸಿರಾಡಿಸುತ್ತದೆ

ಮರಿಗೆ ಹಸಿವಾಗಿದೆ.
ಅದು ತಾಯಿಯ ಹತ್ತಿರದಲ್ಲಿ ಈಸುತ್ತದೆ.
ತಾಯಿ ಮಗ್ಗಲಾಗುತ್ತಾಳೆ.
ಮರಿಗೆ ಬಿಸಿ ಹಾಲು ದೊರೆಯುತ್ತದೆ.



ವ್ಹಿರ್. ವ್ಹಿರ್. ವ್ಹಿರ್.
ಡಾಲ್ಫಿನ್ ಗಳಿಗೆ ಹೊಸ ದನಿ ಕೇಳಿಸುತ್ತದೆ.
ಅದು ಹಡಗು.
ಡಾಲ್ಫಿನ್ ಅದರ ಮಗ್ಗುಲಲ್ಲಿ ಈಸುತ್ತವೆ.
ಮರಿಯು ಕೂಡ ತಾಯಿಯ ಹತ್ತಿರದಲ್ಲಿ ಈಸುತ್ತದೆ.







ಇದು ಒಳ್ಳೆಯ ಈಸುಗಾರ.
ಮರಿ ಡಾಲ್ಫಿನ್ ಮುಂದೆ
ಹೋಗುತ್ತದೆ.
ಅದರ ಬಾಲ ಅಳುಕುತ್ತದೆ.
ಅಳುಕಿದಂತೆ ನೀರಿನಲ್ಲೆ
ಮುನ್ನಡೆಯುತ್ತದೆ.

ಬೆನ್ನಿನ ಮೇಲಿನ ಈಜುರೆಕ್ಕೆಗಳು
ಅದನ್ನು ಉರುಳಿಸಿ ಕೊಡುವದಿಲ್ಲ.
ಅದರ ಮುಂದಿರುವ
ಈಜುರೆಕ್ಕೆಗಳಿಗೆ
ಫ್ಲಿಪ್ಪರ್ಸ ಎಂದು ಹೆಸರು.
ಮರಿ ಡಾಲ್ಫಿನ್ ಅದನ್ನು
ತಳಕ್ಕೆ ಈಸಲು
ಉಪಯೋಗಿಸುತ್ತದೆ.
ಎಡ –ಬಲ ಬದಿಗೆ ಹೋಗಲು ಕೂಡ
ಉಪಯೋಗಿಸುತ್ತದೆ.

ತಾಯಿ ಮತ್ತು ಮರಿ ಡಾಲ್ಫಿನ್
ವೇಗದಿಂದ ಈಸುತ್ತವೆ.
ಹಡಗಿನ ಜತೆ ಪಂದ್ಯವಾಡಲು ಹೋಗುತ್ತವೆ.
ಒಮ್ಮೆಲೆ ಈಸುವದನ್ನು ನಿಲ್ಲಿಸುತ್ತವೆ.
ಹಡಗು ಮುನ್ನಡೆಯುವಾಗಿನ ತೆರೆಗಳ ಮೇಲೆ
ಸವಾರಿ ಮಾಡುತ್ತವೆ.



ಇನ್ನುಳಿದ ಡಾಲ್ಫಿನ್ ಗಳು ಅಲ್ಲಿ ಬರುತ್ತವೆ.
ತೆರೆಗಳ ಮೇಲೆ ಜಿಗಿಯುತ್ತವೆ, ಧುಮುಕುತ್ತವೆ.
ಅವುಗಳ ತ್ವಚೆ ನಯವಾದದ್ದಿದೆ.
ಹೀಗಾಗಿ ನೀರಿನಲ್ಲಿ ಈಸಲು
ಸುಲಭವಾಗುತ್ತದೆ.





ಕತ್ತಲೆಯಾಗುತ್ತಲಿದೆ.
ಡಾಲ್ಫಿನ್ ಹಡಗಿನಿಂದ ದೂರ  ಈಸುತ್ತ ಹೋಗುತ್ತವೆ.
ಇದು ವಿಶ್ರಾಂತಿಯ ಸಮಯ.
ಮರಿ ತಾಯಿಯನ್ನು ಕರೆಯುತ್ತದೆ.

ಟ್ವೀಟ್! ಟ್ವೀಟ್! ! ಟ್ವೀಟ್! ! !
ಅದಕ್ಕೆ ಹಸಿವಾಗಿದೆ.
ತಾಯಿಯ ಹಾಲಿಗಾಗಿ ಹವಣಿಸುತ್ತದೆ.

ನೀರಿನ ಮೇಲೆ ತೇಲುತ್ತ ಡಾಲ್ಫಿನಗಳು
ವಿಶ್ರಾಂತಿ ತೆಗೆದುಕೊಳ್ಳುತ್ತವೆ, ಉಸಿರಾಡಿಸುತ್ತವೆ.
ಅವು ಸಾಕಷ್ಟು ಕಾಲ ವಿಶ್ರಾಂತಿ
ತೆಗೆದುಕೊಳ್ಳಬಹುದು.
ಇಡೀ ದಿನದ ದಣಿವಿನಿಂದಾಗಿ
ಡಾಲ್ಫಿನ್ ಮರಿ ಕಣ್ಣು ಮುಚ್ಚುತ್ತಲಿದೆ





ಮರುದಿನ ತಾಯಿ ಡಾಲ್ಫಿನಗೆ ಹಸಿವು.
ಆಹಾರ ಹುಡುಕಲೇ ಬೇಕು.
ಡಾಲ್ಫಿನಗಳು ತಂಡ ಮಾಡಿ ಬೇಟೆಯಾಡುತ್ತವೆ.
ಡಾಲ್ಫಿನ್ ತಂಡಗಳಿಗೆ **pod** ಎಂದು ಕರೆಯುವರು

ಡಾಲ್ಫಿನ್ ತಂಡಗಳು ಆಹಾರಕ್ಕಾಗಿ ದಿನಾಲು ಬೇಟೆಯಾಡುತ್ತವೆ.
ಅವು ಮೀನು, ಸೀಗಡಿ (shrimp), ಮತ್ತು ಚಿಕ್ಕ ಸ್ಕ್ವಿಡ್ (squid) ಗಳನ್ನು ತಿನ್ನುತ್ತವೆ.
ಇಂದು ಅವುಗಳಿಗೆ ಬಂಗಡೆ ಮೀನು (mackerel) ದೊರೆತಿವೆ.



ಮ್ಯಾಕರೆಲ್ ಈಜುತ್ತ ಹೋದವು.
ಆದರೆ ಡಾಲ್ಫಿನ್ ಸಾಕಷ್ಟು ಚುರುಕು.
ಕೆಲವು ಮೀನುಗಳ ಕೆಳಗೆ,
ಕೆಲವು ಮೀನುಗಳ ಎಡಬದಿಯಲ್ಲಿ
ಕೆಲವು ಮೀನುಗಳ ಬಲಬದಿಯಲ್ಲಿ ಈಜಾಡುತ್ತವೆ.
ಮ್ಯಾಕರೆಲ್ ಗಳು ಒಂದೇ ಬದಿ ಒಕ್ಕಟ್ಟಾದ ಮೇಲೆ
ಬೇಟೆಯಾಡುವದು ಸುಲಭ.





ಒಂದು ಗಾಯಗೊಂಡ ಮೀನು ಡಾಲ್ಫಿನ್
ಮರಿಹತ್ತಿರ ಬಂತು.
ಮರಿ ಅದನ್ನು ಹಿಡಿಯಲು ಹವಣಿಸಿತು.
ಆದರೆ ಮೀನು ದೊಡ್ಡ ಆಕಾರದ್ದು.
ಅದು ಡಾಲ್ಫಿನ್ ಬಾಯಿಯಲ್ಲಿ ಹಿಡಿಸಲಿಲ್ಲ.
ಮೀನು ಪಾರಾಗಿ ಹೋಯಿತು.

ಚರ್ಪ! ಚರ್ಪ! ಚರ್ಪ! ಚರ್ಪ!
ಇದು ತಿಮಿಂಗಿಲುಗಳು
ಮಾಡುವ  ಧ್ವನಿಯು.
ತಿಮಿಂಗಿಲುಗಳು ಡಾಲ್ಫಿನ್ನುಗಳ
ಶತ್ರುಗಳು.
ತಿಮಿಂಗಿಲುಗಳು ಕಡಲು
ಪ್ರಾಣಿ. ಅವು ಸೀಲ,  ದೊಡ್ಡ
ಮೀನು ಮತ್ತು ಡಾಲ್ಫಿನ್
ಗಳನ್ನು ತಿನ್ನುತ್ತವೆ.





ಸ್ಲ್ಯಾಪ್! ಸ್ಲ್ಯಾಪ್! ಸ್ಲ್ಯಾಪ್!
ಡಾಲ್ಫಿನ್ ತನ್ನ ಬಾಲದಿಂದ ನೀರಿನಲ್ಲಿ
ಸಪ್ಪಳ ಮಾಡುತ್ತದೆ.
ಇದು ಅಪಾಯವನ್ನು ಸೂಚಿಸುವ ಸಪ್ಪಳ.
ತಾಯಿ ಡಾಲ್ಫಿನ್ ತನ್ನ ಮರಿಯನ್ನು
ರಕ್ಷಿಸಲು ಹೋಗುತ್ತದೆ.



ಎಲ್ಲ ಡಾಲ್ಫಿನ್ನುಗಳು ವೇಗದಿಂದ
ಈಸುತ್ತ ದೂರ ಹೋಗುವವು.
ಆದರೆ ತಿಮಿಂಗಿಲು ಸಮೀಪ ಬರತೊಡಗಿದೆ.

ಡಾಲ್ಫಿನ್ ಮರಿ ದಣಿದಿದೆ.
ಕೆಲ ಗಂಡು ಡಾಲ್ಫಿನ್ನುಗಳು ಅದರ ರಕ್ಷಣೆಗಾಗಿ ಬರುತ್ತವೆ.





ಅಷ್ಟರಲ್ಲಿ ತಿಮಿಂಗಿಲುಗಳು
ಮ್ಯಾಕರೆಲ್ ತಂಡವನ್ನು ನೋಡುತ್ತವೆ.
ಅವು ಮ್ಯಾಕರೆಲಗಳ ಬೆನ್ನು ಹತ್ತುತ್ತವೆ.
ಡಾಲ್ಫಿನ್ನುಗಳು ಈಸುತ್ತ ದೂರ ಹೋಗುತ್ತವೆ.
ಅವು ಈಗ ಸುರಕ್ಷಿತ.

ಪ್ರತಿ ದಿನ ಮರಿಯು ದೊಡ್ಡದಾಗುತ್ತಲಿದೆ.
ಈಗ ಅದಕ್ಕೆ  ಆರು ತಿಂಗಳು ವಯಸ್ಸು.
ಅದು ನಾಲ್ಕು ಅಡಿ ಉದ್ದ.
ಅದು ಎರಡು ವರುಷದಾದ ಮೇಲೆ
ಅದರ ತಾಯಿಯಷ್ಟು ದೊಡ್ಡದಾಗುವದು.





ಕೆಲವು ವೇಳೆ ತಾಯಿ ಡಾಲ್ಫಿನ್ ತನ್ನ ಮರಿಯನ್ನು
ಆಹಾರಕ್ಕಾಗಿ ಮುಳುಗಲಿಕ್ಕೆ ಬಿಡುವದು.
ಅದು ಹೋದಾಗ ಉಳಿದ ಹೆಣ್ಣು ಡಾಲ್ಫಿನ್ನುಗಳು
ಮರಿಯ ಕಾವಲು ಮಾಡುತ್ತವೆ.

ಡಾಲ್ಫಿನ್ ಮರಿಯು ಅದರ ತಾಯಿಯಂತೆ
ಅಷ್ಟು ಆಳವಾದ ನೀರಿನಲ್ಲಿ ಮುಳುಗಲಾರದು.
ಮರಿಯು 3 ನಿಮಿಷಕ್ಕಿಂತ ಹೆಚ್ಚು ವೇಳೆ
ಆಳವಾದ ನೀರಲ್ಲಿ ಇರಲಾರದು.
ತಾಯಿ ಡಾಲ್ಫಿನ್ 100 ಅಡಿ ಆಳದ ವರೆಗೆ
ಹೋಗಬಹುದು.
ಅಲ್ಲಿಯ ನೀರು ಬಹಳ ತಣ್ಣಗಿರುವದು.
ಆದರೆ ಡಾಲ್ಫಿನ್ ದ ಮೈ ತುಪ್ಪಳವಿದ್ದದ್ದರಿಂದ
ಅದನ್ನು ಬೆಚ್ಚಗಿಡುತ್ತದೆ.
ಇದು 6 ನಿಮಿಷಗಳ ವರೆಗೆ
ಅಂತಹ ನೀರಿನಲ್ಲಿ ಇರಬಹುದು.

ತಾಯಿ ಡಾಲ್ಫಿನ್ ಬಾಯಿಯಲ್ಲಿ ಮೀನನ್ನು
ಹಿಡಿದುಕೊಂಡು ತಿರುಗಿ ಬರುವದು.
ಮರಿಯು ತನ್ನಷ್ಟಕ್ಕೆ ತಾನೇ ಮೀನನ್ನು
ಹಿಡಿಯಬೇಕು  ಎಂಬುದನ್ನು ಕಲಿಸಲು ಅದು
ಬಾಯಿಯಿಂದ ಮೀನನ್ನು ಹೊರಗೆ ಚೆಲ್ಲುವದು.





ಮರಿಯು ಮೀನನ್ನು ಹಿಡಿಯಲು ಪ್ರಯತ್ನಿಸುವದು.
ಅದನ್ನು ಬಾಯಿಯಲ್ಲಿ ಹಿಡಿಯುವದು.
ಅದರ ಚಿಕ್ಕ ಹಲ್ಲುಗಳು ಕೂಸಿನ ಹಲ್ಲುಗಳಂತೆ.
ಮರಿ ಬೆಳೆದಂತೆ ಹಲ್ಲುಗಳು ಕೂಡ
ದೊಡ್ಡದಾಗುವವು.
ಮರಿಯು ಹಲ್ಲಿನಿಂದ ಕಡಿಯದೆ
ಇಡೀ ಮೀನನ್ನು ನುಂಗಿಬಿಡುವದು.

ವ್ರಿರ್. ವ್ರಿರ್. ವ್ರಿರ್.
ಸೀಗಡಿ ಮೀನುಗಳನ್ನು ಹಿಡಿಯುವ ಹಡಗು ಬರುತ್ತಲಿದೆ



ಮೀನುಗಾರರು ಬಲೆಗಳನ್ನು ಜಗ್ಗುತ್ತಲಿದ್ದಾರೆ.
ಬಲೆಗಳ ತುಂಬ ಮೀನುಗಳು ಮತ್ತು ಸೀಗಡೆಗಳು.
ಆದರೆ ಅವರಿಗೆ ಮೀನುಗಳು ಬೇಕಿಲ್ಲ.
ಮೀನುಗಳನ್ನು ಸಮುದ್ರದಲ್ಲಿ ಒಗೆಯುವರು.
ಡಾಲ್ಫಿನ್ ಆ ಮೀನುಗಳನ್ನು ತಿನ್ನುವವು.



ಕೆಲವು ಸಲ ನೀರು ಕೆಸರಾಗಿರುತ್ತದೆ.
ಡಾಲ್ಫಿನ್ ಗಳಿಗೆ ಕೆಸರಿನಲ್ಲಿಯ ಮೀನುಗಳು
ಕಾಣುವದಿಲ್ಲ.
ಕ್ಲಿಕ್! ಕ್ಲಿಕ್! ಕ್ಲಿಕ್!
ಡಾಲ್ಫಿನ್ನುಗಳು ಹೊಸ ದನಿಯನ್ನು ಮಾಡುತ್ತವೆ.
ಈ ದನಿಯು ನೀರಿನೊಳಗೆ ಹೋಗುತ್ತದೆ.
ದನಿಯ ತರಂಗಗಳು ಮೀನುಗಳನ್ನು ಮುಟ್ಟಿ
ಡಾಲ್ಫಿನ್ ವರೆಗೆ ತಿರುಗಿ ಬರುತ್ತವೆ.





ಈ ಧ್ವನಿ ತರಂಗಗಳು ಮೀನು ಎಲ್ಲಿದೆ ಎಂಬುದನ್ನು ತಿಳಿಸುತ್ತವೆ..



ಕ್ಲಿಕ್! ಕ್ಲಿಕ್! ಕ್ಲಿಕ್!
ಡಾಲ್ಫಿನ್ ಮರಿ ಹಿಂದೆ ಮುಂದೆ
ಈಸುತ್ತ ಚಿಕ್ಕ ಪುಟ್ಟ ಮೀನುಗಳನ್ನು ತಿನ್ನುತ್ತದೆ.
ಅಷ್ಟರಲ್ಲಿ ಆ ಕೆಸರಿನ ನೀರಿನಲ್ಲಿ ದೊಡ್ಡ ಪ್ರಾಣಿ
ಕಾಣುತ್ತದೆ.
ತಾಯಿ ಡಾಲ್ಫಿನ್ನಿನಗಿಂತ ಬಹು ದೊಡ್ಡದು.
ಇದು ಶಾರ್ಕ ಮೀನು.
ಅದು ಕೂಡ ಮೀನುಗಳ ಬೇಟೆಗೆ ಬಂದಿದೆ.

ಸ್ಲ್ಯಾಪ್! ಸ್ಲ್ಯಾಪ್! ಸ್ಲ್ಯಾಪ್!
ಒಂದು ಡಾಲ್ಫಿನ್ ಅಪಾಯ ಸೂಚಿಸುವ
ಧ್ವನಿ ಮಾಡುತ್ತದೆ.
ಆದರೆ ಬಹಳ ತಡವಾಯಿತು!
ಮರಿಯ ಈಜುರೆಕ್ಕೆಗಳನ್ನು ಹಿಡಿದು ಶಾರ್ಕ
ಎಳೆಯುತ್ತದೆ.
ಶಾರ್ಕವು ಮರಿಯನ್ನು ಬಿಡುವದಿಲ್ಲ.
ಅದಕ್ಕೆ ಗಾಯವಾಗಿದೆ.
ಅದರ ಈಜುರೆಕ್ಕೆಯ ತುದಿ ಕತ್ತರಿಸಿದೆ.

ಗಂಡು ಡಾಲ್ಫಿನ್ನುಗಳು ಶಾರ್ಕದ ಮೇಲೆ
ದಾಳಿ ಮಾಡುತ್ತವೆ.
ತಮ್ಮ ಕೊಕ್ಕೆಯಿಂದ ಹೊಡೆಯುತ್ತವೆ.
ಶಾರ್ಕಕ್ಕೆ ಗಾಯವಾಗುತ್ತದೆ.
ಅದು ಈಸುತ್ತ ಮಾಯವಾಗುತ್ತದೆ.



ಡಾಲ್ಫಿನ್ ಮರಿಗೆ ಉಸಿರಾಡಲು ಹವೆ ಬೇಕು.
ಎರಡು ಡಾಲ್ಫಿನ್ನುಗಳು ಅದರ ಕೆಳಗೆ ಈಸುತ್ತ ಹೋಗುತ್ತವೆ.
ಅವು ಮರಿಯನ್ನು ನೂಕುತ್ತ ನೀರಿನ ಮೇಲೆ ಒಯ್ಯುತ್ತವೆ.
ಈಗ ಮರಿ ಉಸಿರಾಡಿಸಬಹುದು.
ಡಾಲ್ಫಿನ್ ತಂಡ ಮರಿಯ ರಕ್ಷಣೆಗಾಗಿ ನಿಲ್ಲುತ್ತದೆ.
ಅದಕ್ಕೆ ಅಷ್ಟೊಂದು ಗಾಯವಾಗಿಲ್ಲ.
ಈಜುರೆಕ್ಕೆಗಳ ಗಾಯ ಮಾಯವಾಗಬಹುದು.



ಟ್ವೀಟ್! ಟ್ವೀಟ್! ಟ್ವೀಟ್!
ತಾಯಿ ಡಾಲ್ಫಿನ್ ಮರಿಯನ್ನು ಕರೆಯುತ್ತದೆ.
ಮರಿಯು ರಭಸದಿಂದ ತಾಯಿ ಹತ್ತಿರ ಹೋಗುತ್ತದೆ.
ಅದರ ಹಾಲು ಕುಡಿಯುವ ವೇಳೆ.
ಒಂದು ವರುಷದ್ದಾದ ಮೇಲೆ ಅದು ಹಾಲು ಕುಡಿಯುವದಿಲ್ಲ.
ಆ ಮೇಲೆ ತನ್ನ ಕಾಳಜಿಯನ್ನು ತಾನೇ ತೆಗೆದುಕೊಳ್ಳುವದು.



ಡಾಲ್ಫಿನ್ನುಗಳ ಆಯುಷ್ಯ 30 ವರುಷ.
ಇದು ತನ್ನ ತಂಡದಲ್ಲಿ ಸಾಕಷ್ಟು ವರುಷ ಇರುವದು.

ಸಮಾಪ್ತಿ